<u>ಕರ್ನಾಟಕ ವಿಧಾನ ಪರಿಷತ್ತು</u>

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 71 (195)
2. ಸದಸ್ಯರ ಹೆಸರು : ಶ್ರೀ ಆರ್ ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ )
3. ಉತ್ತರಿಸಬೇಕಾದ ದಿನಾಂಕ : 01-02-2021
4. ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಕಾಲ ಇಲಾಖೆಯ ಕೆಲಸ ಕಾರ್ಯಗಳೇನು | ರಾಜ್ಯದ ನಾಗರೀಕರಿಗೆ ಸರ್ಕಾರದ ಸೇವೆಗಳನ್ನು ನಿಗದಿತ ಕಾಲಮಿತಿಯಲ್ಲಿ ಒದಗಿಸುವ ಉದ್ದೇಶದಿಂದ ಸಕಾಲ ಯೋಜನೆಯನ್ನು 2012 ರಲ್ಲಿ ಪ್ರಾರಂಭಿಸಲಾಯಿತು. ವಿವಿಧ ಇಲಾಖೆಗಳ ನಾಗರೀಕ ಕೇಂದ್ರಿತ ಸೇವೆಗಳಿಗೆ ಕಾಲಮಿತಿಯನ್ನು ಗೊತ್ತುಪಡಿಸುವುದು ಸಕಾಲ ಯೋಜನೆಯ ಪ್ರಮುಖ ಕಾರ್ಯವಾಗಿದೆ. ಇದುವರೆವಿಗೂ 98 ಇಲಾಖೆ/ ಸಂಸ್ಥೆಗಳ ಒಟ್ಟು 1025 ಸೇವೆಗಳನ್ನು ಸಕಾಲದಡಿ ಅಧಿಸೂಚಿಸಲಾಗಿದೆ. |
| ಆ) | ಸಾರ್ವಜನಿಕರಿಗೆ ಸಕಾಲ ಇಲಾಖೆಯಿಂದ ಯಾವ ರೀತಿ ಉಪಯೋಗವಾಗುತ್ತಿದೆ; (ವಿವರಗಳನ್ನು ನೀಡುವುದು) | ಸಕಾಲದಡಿ ಅಧಿಸೂಚಿಸಲಾದ ಸೇವೆಗಳಿಗೆ ಕಾಲಮಿತಿಯನ್ನು ನಿಗದಿ ಪಡಿಸಲಾಗುವುದರಿಂದ ನಾಗರೀಕರಿಗೆ ಗೊತ್ತುಮಾಡಿದ ಕಾಲಮಿತಿಯೊಳಗೆ ಸೇವೆಗಳು ಲಭ್ಯವಾಗುತ್ತವೆ. ಎಲ್ಲಾ ಸರ್ಕಾರಿ ಕಚೇರಿಗಳಲ್ಲಿ ಸಕಾಲ ನಾಮ ಫಲಕವನ್ನು ಪ್ರದರ್ಶಿಸಲಾಗುತ್ತಿದ್ದು, ನಾಗರೀಕರಿಗೆ ಸೇವೆಗಳ ವಿವರ ಹಾಗೂ ಪರಿಹಾರ ವೆಚ್ಚದ ಬಗ್ಗೆ ಮಾಹಿತಿ ಲಭ್ಯವಾಗುತ್ತಿದೆ.<br><br>ನಿಗದಿತ ಕಾಲಮಿತಿಯೊಳಗೆ ಸೇವೆ ಲಭ್ಯವಾಗದಿದ್ದಲ್ಲಿ ಮೇಲ್ಮನವಿಯನ್ನು ದಾಖಲಿಸಲು ಹಾಗೂ ಪರಿಹಾರ ವೆಚ್ಚವನ್ನು ಕೋರಲು ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011 ಮತ್ತು (ತಿದ್ದುಪಡಿ) ಅಧಿನಿಯಮ 2014ರಡಿ ಅವಕಾಶ ಕಲ್ಪಿಸಲಾಗಿದೆ.<br><br>ಸಕಾಲದಡಿ ಇದುವರೆವಿಗೂ ಒಟ್ಟು 22,91,46,008 ಅರ್ಜಿಗಳನ್ನು ಸ್ವೀಕರಿಸಿ 22,85,22,647 ಅರ್ಜಿಗಳನ್ನು ವಿಲೇಮಾಡಲಾಗಿದ್ದು, ನಿಗದಿತ ಕಾಲಮಿತಿಯಲ್ಲಿ ವಿಲೇಮಾಡಿದ ಅರ್ಜಿಗಳ ಪ್ರಮಾಣ ಶೇಕಡ 95.5 ಆಗಿರುತ್ತದೆ. |
| ಇ) | ಆಡಳಿತದಲ್ಲಿ ಚುರುಕು ಉಂಟಾಗುವಂತೆ ಮಾಡಲು ಈ ಇಲಾಖೆಯಿಂದ ಯಾವ ರೀತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ? (ಕಳೆದ ಎರಡು ವರ್ಷಗಳಲ್ಲಿ ಆಗಿರುವ ಪ್ರಗತಿಯ ವಿವರ ನೀಡುವುದು) | ಸಕಾಲ ಯೋಜನೆಯನ್ನು ಮತ್ತಷ್ಟು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಗಿನಂತೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br>• ಸಕಾಲ ಮಿಷನ್ ವತಿಯಿಂದ ಎಲ್ಲಾ ಇಲಾಖೆಗಳ ನೋಡಲ್ ಅಧಿಕಾರಿಗಳಿಗೆ ನಿಯಮಿತವಾಗಿ ತರಬೇತಿ ನೀಡಲಾಗುತ್ತಿದೆ.<br>• ಪ್ರತಿ ವಾರ ಇಲಾಖೆಗಳಲ್ಲಿ ಬಾಕಿ ಉಳಿದ ಅರ್ಜಿಗಳ ವಿಲೇವಾರಿ ಮಾಡುವಂತೆ ಕೋರಿ ಎಲ್ಲಾ ಇಲಾಖೆಗಳಿಗೆ MIS ವರದಿಗಳನ್ನು ಕಳುಹಿಸಲಾಗುತ್ತಿದೆ. |

| | | |
|---|---|---|
| | | • ಎಲ್ಲಾ ಇಲಾಖಾ ಮುಖ್ಯಸ್ಥರು ಪ್ರತಿ ಸೋಮವಾರ ತಮ್ಮ ಹಂತದಲ್ಲಿ ಬಾಕಿ ಅರ್ಜಿಗಳನ್ನು ವಿಲೇವಾರಿ ಮಾಡಲು ಸಭೆ ನಡೆಸುವಂತೆ ನಿರ್ದೇಶನ ನೀಡಲಾಗಿದೆ.<br>• ಬಾಕಿ ಅರ್ಜಿಗಳನ್ನು ಶೀಘ್ರವಾಗಿ ವಿಲೇ ಮಾಡುವ ಸಲುವಾಗಿ ವಿವಿಧ ಇಲಾಖೆಗಳಲ್ಲಿ ದಿನಾಂಕ 30-11-2020 ರಿಂದ ದಿನಾಂಕ 19-12-2020ರವರೆಗೆ ವಿವಿಧ ಹಂತಗಳಲ್ಲಿ ಸಕಾಲ ಸಪ್ತಾಹ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.<br>• ಪ್ರತಿ ತಿಂಗಳು ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಇಲಾಖಾ ಮುಖ್ಯಸ್ಥರೊಂದಿಗೆ ಸಕಾಲದಡಿ ಅರ್ಜಿಗಳ ವಿಲೇವಾರಿ ಬಗ್ಗೆ ಪರಿಶೀಲನಾ ಸಭೆ ನಡೆಸಿ ಸೂಕ್ತ ನಿರ್ದೇಶನಗಳನ್ನು ನೀಡುತ್ತಿದ್ದಾರೆ.<br>2019 ಮತ್ತು 2020 ನೇ ಸಾಲಿನಲ್ಲಿ ಸಕಾಲ ಯೋಜನೆಯಡಿ ಒಟ್ಟು 5,00,25,436 ಅರ್ಜಿಗಳನ್ನು ಸ್ವೀಕರಿಸಿ 5,01,95,992 ಅರ್ಜಿಗಳನ್ನು ವಿಲೇ ಮಾಡಲಾಗಿದೆ. |

ಕಡತ ಸಂಖ್ಯೆ: ಸಿಆಸುಇ 04 ಎಸ್‌ಪಿಎಂ 2021

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು